ಶ್ರೀ

# ವಿಜಯ






# ವಿನಾಯಕ

ಶ್ರೀ ಹೊಯ್ಸಳ



ಪ್ರಕಾಶಕರು

ಮಾದರಿ ಮಕ್ಕಳ ಕೂಟ

ವಿಶ್ವೇಶ್ವರಪುರ, ಬೆಂಗಳೂರು ನಗರ

ಮೊದಲ ಕಮಲ ] [ ಬೆಲೆ :

# ಮೊಗವಾಗಿಲ ಮುನ್ನುಡಿ

ಶ್ರೀಯುತ ಹೊಯಿಸಳರು ಹಲವಾರು ವರ್ಷಗಳಿಂದ ಸಾಹಿತ್ಯ ಪ್ರಪಂಚದಲ್ಲಿ ದುಡಿದು ಕೀರ್ತಿಗಳಿಸಿ ಕನ್ನಡಿಗರೆಲ್ಲರಿಗೂ ಚಿರಪರಿಚಿತರಾಗಿದ್ದಾರೆ. ಇವರಿಂದ ರಚಿತವಾಗಿರುವ "ಮಗುವಿನ ಕೂಗು" "ಹಾಡಿನ ಚಿಲುಮೆ" "ಓನಾಮ" "ಗೆಲುವು ಗುಂಡಾಣಿ" "ಆಕಾಶವಾಣಿ" ಮೊದಲಾದ ಕವನಗಳಲ್ಲಿ ಅವರ ಕವಿತಾಶಕ್ತಿಯನ್ನೂ ಮತ್ತು ಮಧುರ ಹಾಸ್ಯರಸವನ್ನೂ ಕಾಣಬಹುದು.

ವಿನಾಯಕನ ಹಬ್ಬದ ಸಲುವಾಗಿ "ವಿಜಯ ವಿನಾಯಕ" ಎಂಬುದನ್ನು ಬರೆದು ಸರಸ್ವತೀ ಭಂಡಾರವನ್ನು ಹೆಚ್ಚಿಸಿದ್ದಾರೆ. ಹಳೆಯ ವಿಷಯವನ್ನೇ ಹೊಸರೀತಿಯಲ್ಲಿ ಹೇಳಿದ್ದಾರೆ. ವಿಜಯ ವಿನಾಯಕನು ಹೊಯಿಸಳರಿಗೆ ಮುಂದೆಯೂ ದೇಶ ಭಾಷಾಸೇವೆಗಳನ್ನು ಸಲ್ಲಿಸಲು ಹೆಚ್ಚು ಶಕ್ತಿಯನ್ನು ದಯಪಾಲಿಸಲೆಂದು ಹಾರೈಸುತ್ತೇನೆ.



ಎಸ್. ವೀರಬಸಪ್ಪ, ಬಿ.ಎ., ಎಲ್‌ಎಲ್.ಬಿ.,
ಪ್ರೆಸಿಡೆಂಟ್, ಡಿಸ್ಟ್ರಿಕ್ಟ್ ಬೋರ್ಡ್, ಚಿತ್ರದುರ್ಗ.



Dewan Bahadur.
**Rajakarya Prasakta K. Ramaswamy, B.S.E., J.P.**
*(Hon. Presidency. Magistrate, Bombay)*

Dewan Bahadur K. Ramaswamy thanks Mr. Hoysala for very kindly sending two copies of the book "Vijaya Vinayaka" edited by him. The poems are very nicely brought up and the book will be a very good addition to the Kannada Library and also very useful for children for the daily worship of Ganapathi.



## ಒಂದು ಮಾತು

ಈ ಮೊದಲ ಕುಸುಮವು ಮಾವರಿ ಮಕ್ಕಳ ಕೂಟದ ತಾವರೆಯಕೊಳದಲ್ಲಿ ಬೆಳೆದು ಕಂಗೊಳಿಸಿದುದು ಶ್ರೀವಿಜಯ ವಿನಾಯಕನ ಕೃಪೆಯಿಂದ. ಶ್ರೀ ಹೊಯಿಸಳರೂ ಶ್ರೀ. ಎ. ನಾರಾಯಣರಾಯರೂ ಕೂಡಿ ಉಚಿತವಾಗಿ ಮಕ್ಕಳಕೂಟಕ್ಕೆ ಈ ಭಾಗ್ಯವನ್ನು ಒದಗಿಸಿಕೊಟ್ಟಿದ್ದಾರೆ. ಇವರಿಗೆ ದೇವರು ಸನ್ಮಂಗಳವನ್ನುಂಟುಮಾಡಲಿ ಎಂಬುದು ಮಕ್ಕಳ ಕೂಟದ ಪರವಾಗಿ ನಮ್ಮ ಹಾರೈಕೆ.

ಎಂ. ಕುಮಾರಸ್ವಾಮಿ ಪಿಳ್ಳೈ　　ಟಿ. ಎಂ. ಆರ್. ಸ್ವಾಮಿ



# ವಿಜಯ ವಿನಾಯಕ.

(೧)

ಚೌತಿಯು ಭಾದ್ರದೊಳೈತರೆ ಗಣಪನು
ತಾತನ ಚರಣಕೆ ವಂದಿಸುತ
ಮೂಜಗದೊಳಗಣ ಪೂಜೆಯಗೊಳ್ಳಲು
ಸೋಜಿಗವೆಂದೆನೆ ಹೊರವಂಟ.
ಮೂಷಕವೇರುತ ವೇಷವ ಧರಿಸುತ
ಪಾಶಾಂಕುಶಗಳು ಕೈಗಳಲಿ.
ಕೊರಳಲಿ ಹಾರವು ಕರದೊಳು ಮೋದಕ
ಉರದೊಳು ಹೊಳೆಯುವ ಜನಿವಾರ!
ಗಿರಿಜೆಯ ತನುಜಗೆ ಸುರನರ ಭುಜಗರು
ಸುರುಚಿರ ಪೂಜೆಯ ಮಾಡಿದರು.
ತೊಳಗುವ ಮಂಟಪ ಬೆಳಗುವ ಪೀಠದ
ಮೊಳಗುವ ವಾದ್ಯದ ನಾದದಲಿ
ಅರಿಸಿನ ಕುಂಕುಮ ಗರಿಕೆಯ ಚಿಗುರು
ಪರಿಮಳ ಪುಷ್ಪದ ಹಾರಗಳು!
ಸಿಂಧುರ ಚಂದನ ಗಂಧದ ಬತ್ತಿಯು
ಚಂದದ ಬಹು ವಿಧ ತಿಂಡಿಗಳು!
ಸೊಡರಿನ ಆರತಿ ಬೆಡಗಿನ ಪೂಜೆಯು
ನೆಡರಿನ ದೇವಗೆ ರಚಿಸಿದರು.
ಹರುಷದಿ ಕೊಂಡನು, ವರಗಳ ನಿತ್ತನು
ಹೊರಟನು ತನ್ನಯ ಆಲಯಕೆ.

(೨)

ಪಡುವಲ ಕಡಲೊಳಗಡಗಲು ಸೂರ್ಯನು
ಅಡರಿದ ಗಣಪನು ಮೂಷಕವ.
ಕತ್ತಲೆ ಕವಿಯಲು ಮೆತ್ತನೆ ನಡೆಯಿತು
ಹೊತ್ತದು ಗಣಪನ ಭಾರವನು.
ಕಾರಿನ ಮೋಡವು ತಾರೆಯ ಮರೆಯಿಸೆ
ಮೋರೆಯ ತೋರನು ಚಂದಿರನು.
ಬೆಳಕದು ಸಾಲದು ತಿಳಿಯದು ಮಾರ್ಗವು
ಸುಳಿವುದು ಇಲಿಯದು ಮೆಲ್ಲಮೆಲನೆ.
ಮಣಿಯನು ಬೆಳಗುತ ಫಣವನು ತೂಗುತ
ಫಣಿವರ ಬಂದನು ಎದುರಿನಲಿ.
ಹೆಡೆಯನು ನೋಡಲು ನಡುಕವದಡಸಿತು
ಒಡೆಯಿತು ಎದೆಯಾ ಮೂಷಕಗೆ.
ಕಾಲುಗಳೆಡೆಹುತ ಬೀಳಲು ಮೂಷಕ
ಸ್ಥೂಲಶರೀರಿಯು ಗಣಪತಿಯು
ಸೇರಿದನಿಳೆಯನು ಬೊರಲು ಬಿದ್ದನು
ಮೀರಿದ ವೇಗದ ರಭಸದಲಿ.
ಹರಿದುದು ಧೋತ್ರವು ಮುರಿಯಿತು ದಂತವು
ಸುರಿದುದು ನೊಸಲಿನ ಸಿಂಧುರವು
ಉಟ್ಟುದು ಸಡಲಿತು ಹೊಟ್ಟೆಯು ಒಡೆಯಿತು
ಮಟ್ಟೆಯು ಮುಸುಕಿತು ಅಸ್ಯವನು
ಭೇದಿಸಲುದರವು ಮೋದಕವೆಲ್ಲವು
ಮೇಧಿನಿಗೈದುತ ಉರುಳಿದುವು.
ನೋಡುತ ಗಣಪನ ಪಾಡನು ಚಂದಿರ
ಮಾಡಿದ ಬಲು ಪರಿಹಾಸವನು
ಇಂದಿನ ಸೊಬಗಿನ ಅಂದವ ಕಂಡೆಯ
ಹಲ್ಲವರ ಮೂರ್ತಿಯು ಹೀನಂತೆ,

ಉರುಳಿತು ಮೊದಕ ಸರಿಪಡಿಸುವದೈ.
ಬರದಿಹ ನಿನ್ನಯ ಹೊಟ್ಟೆಯನು.
ಥಟ್ಟನೆ ಎದ್ದನು ಉಟ್ಟನು ಧೋತ್ರವ.
ತೊಟ್ಟನು ತನ್ನಾಭರಣಗಳ.
ಆರಿಸಿ ಮೋದಕ ಹೇರಿಸಿ ಜಠರದೆ
ಭಾರಿಯ ಸರ್ಪವ ಕಟ್ಟಿದನು.
ಕೋಪವು ಉಕ್ಕಲು ಸರ್ಪವ ಬಿಗಿಯುತ
ಶಾಪವ ನಿತ್ತನು ಚಂದಿರಗೆ –
" ಎಲವೋ ಚಂದ್ರನೆ ನಲಿಯುವೆ ಗರ್ವದಿ
ಬಲುತರ ಚಲ್ವಿಕೆ ನಿನದೇನೊ !
ಷೋಡಶ ಕಲೆಗಳು ಬಾಡಿದುವಿಂದಿಗೆ
ನೋಡರು ನಿನ್ನೀಜಗದೊಳಗೆ !
ಕಾರಿನ ಮೇಘವ ಮೀರಿದ ಕಪ್ಪಿನ
ಮೋರೆಯುದಾಗಲಿ ನಿನಗಿನ್ನು !
ಬೇಗನೆ ತೆರಳು ! ಸಾಗರದೊಡಲಲಿ
ಹೋಗಿರು ನೀನ್ನಾ ಮನೆಯೊಳಗೆ"
ಬೆಚ್ಚಿಬೀಳುತ ಮುಚ್ಚುತ ಮುಖವನು
ಹುಚ್ಚನ ತೆರದೊಳು ಚಂದಿರನು
ಭರದಲಿ ಓಡುತ ಶರಧಿಯ ಸೇರುತ
ಕೊರಗಿದ ಮೀರಿದ ದುಗುಡದಲಿ.

(೩)

ಇತ್ತಲು ಗಣಪನು ಸುತ್ತಿದ ಸೊಂಟಕೆ
ಹುತ್ತದ ದೊರೆಯನು ಬಿಗಿಯಾಗಿ.
ಏರುತ ಇಲಿಯನು ಸಾರಿದ ಸಗ್ಗಕೆ
ತಾರೆಯ ವಿಸ್ತರ ಮಾರ್ಗದಲಿ.
ಇಂದುವ ಕಾಣದೆ ನೊಂದರು ಮೂಜಗ
ಬಿಂಕರು ಗಣಪನ ಅಲಕ್ಷ್ಯಕೆ,

ವಂದಿಸಿ ಗಣಪಗೆ ಎಂದರು “ ಕೊಡುವುದು
ಚಂದ್ರಗೆ ಹಿಂದಿನ ರೂಪವನು.
ಸನ್ನುತ ದೇವ! ಬಿನ್ನಹ ಲಾಲಿಸು
ಮನ್ನಿಸು ಶಶಿಯಪರಾಧವನು ”
ಸುರನರಭುಜಗರ ಮೊರೆಯನು ಕೇಳುತ
ಮರುಗಿದ ಗಣಪನು ಮನದೊಳಗೆ.
“ವರವನು ಕೊಡವೆನು ಶರಣಾಗತರಿಗೆ!
ಬರಿಸಿರಿ ಶಶಿಯನು ನೀವೀಗ ”
ಕಡಲಿಂ ಭರದಲಿ ಉಡುಪತಿ—ಬಂದನು
ಕೆಡದನು ಗಣಪನ ಚರಣದಲಿ —
“ ಮನ್ನಿಸು ದೇವ-ಎನ್ನಪರಾಧವ!
ಸನ್ನುತ ಮೂರ್ತಿಯು ನೀನಲ್ತೆ.
ನಿನ್ನಂ ನೊಸಲಲಿ ಎನ್ನನು ತಾಳಲು
ಧನ್ಯರದಾರೈ ಎನ್ನಪೊಲು”
ಗಜಮುಖ ಮೆಚ್ಚಿದ ರಜನೀಕಾಂತನ
ಭಜನೆಯ ಪರಿಯನು ಕೇಳುತಲಿ-
“ ಹಿಮಕರ ಕೇಳ್ವುದು! ಸುಮನಸರಾಧ್ಯರು!
ಶ್ರಮೆಯನು ತಳೆದರು ನಿನಗಾಗಿ.
ಈ ಅಪರಾಧವ ಮನ್ನಿಸಿ ನಿನ್ನನು
ಎನ್ನಯ ನೊಸಲಲಿ ಧರಿಸುವೆನು!
ಮುದ್ದಿನ ಚಂದ್ರನೆ ಬುದ್ಧಿಯ ಕಲಿವುದು-
ವೃದ್ಧಿಕ್ಷಯಗಳು ನಿನಗುಂಟು!
ಶುದ್ಧದ ದಿನದೊಳು ವೃದ್ಧಿಯನೈದುವೆ
ಸಿದ್ಧಿವಿನಾಯಕ ಕೃಪೆಯಿಂದ!
ಉಡುಪತಿ ಗಮನಿಸು ಜಡತನ ಬಪ್ಪುದು
ಎಡಬಿಡದೆರಡನೆ ಪಕ್ಷದೊಳು!
ಬೆಸಕನ ಚೌತಿಯ ದಿನದೊಳು ನಿನ್ನನು

ಮನುಜರು ನೋಡರು ಧರೆಯೊಳಗೆ!
ಅಲ್ಲದೆ ನೋಡಲು ಟೊಳ್ಳಹವಾದವು
ತಳ್ಳದೆ ಬಪ್ಪುದು ನೋಡಿದಗೆ "
ಆನೆಯ ಸೊಂಡಿಲನಾನೆಯ ಕರ್ಣದ
ಆನೆಯ ದಂತದ ದೇವನಿಗೆ
ಜಯ ಜಯ ಜಯ ಜಯ ಜಯ ಜಯವೆನ್ನುತ
ಮುದಳಿವರೆಲ್ಲರು ತವ್ಮಡಿಗೆ.
ಸನ್ನುತ ಗಣಪನ ಚನ್ನಿಯ ಕಥೆಯಿಂದ
ಪುನ್ನಿನ ಋಷಿಗಳು ಪೇಳಿಹುದ
ಕನ್ನಡ ನುಡಿಯಲಿ ಬಿನ್ನವಿಸಿದೆನಾಂ
ಮನ್ನಿಸಿ ಸುಜನರು ಕೇಳುವುದು

ಶ್ರೀ ಅಂಬಾದಾಸರು.

---

## ಬಿನಕ

ಜಗದ ಒಡೆಯ ಬಿನಕೆಗೆ | ಕನಕದೊಡಲ ಬಿನಕಗೆ
ಸಿದ್ಧ ಶಿವನ ತನುಜಗೆ | ನಾಡ ಸುಖದ ಬಿನಕಗೆ
ಉಫೇ ಉಫೇ ಉಫೇ
ಆರುನೂರು ಬಾಲರು | ಸೇರಿ ಇರುವ ಶಾಲೆಯು
ಭಾರಿಯಾಗಿ ಬೆಳೆಯಲಿ | ಬೆಳಕನಾಡಿಗೀಯಲೀ
ಉಫೇ ಉಫೇ ಉಫೇ
ನವ್ಮ ನಗರಿ ಸೌಧಪುರಿ | ಶಾಂತಿಸೌಖ್ಯ ಶಿರಿಯಝರಿ
ಕ್ಲಾಂತ ಜನರ ಯಾತ್ರೆ ಪುರೀ | ಆಗುವಂತೆ ಮಾಡು ದೊರೆ
ಉಫೇ ಉಫೇ ಉಫೇ
ಪುರದ ಜನವ ಕೂಡುತ | ಶಿರಿಯ ಸುತರ ಕೂಗುತ
ಹರಿಯ ಜನರ ಸೇರುತ | ಬರುವ ಗಣಪಗೆರಗುವಾ
ಉಫೇ ಉಫೇ ಉಫೇ

ಬುದ್ಧ ಜಿನ್ನ ಶಂಕರ । ಏಸು ಮಹಮದಾದಿಯಾ
ಮುದ್ದು ಬಸವ ಭಕ್ತರ । ವೃಂದಕೆಲ್ಲ ವಂದಿಸಿ
ಉಘೇ ಉಘೇ ಉಘೇ
ಕೂಗಿ ಹೇಳಿ ದೂರನು । ಕೇಳಲಾತಬಾರನೇ
ಸಾರಿಬರ್ಪ ಗಣಪನು । ಕೇಳು ವರವನೆನುವನು
ಉಘೇ ಉಘೇ ಉಘೇ
ಬೆನಕ ನಮಗೆ ಜೀವನು । ಬೆನಕ ನಮಗೆ ಈವನು
ಬೆನಕ ಎಮ್ಮ ಕಾವನು । ಅವನ ಭಜಿಸಿ ಬಾಳುವ
ಉಘೇ ಉಘೇ ಉಘೇ

## ಗಣನಾಯಕ

ಶಿವಸೂನು ಗಣನಾಯಕ । ಭವದಾದಿ ಗಣನಾಯಕ
ಮಣಿವೆನು ಗಣನಾಯಕ । ಗಣನಾಥ ಶುಭದಾಯಕ ॥ಪ॥
ಆರ್ಯರ ಮನದೇವ । ಕಾರ್ಯದ ಮೊದಲಲ್ಲಿ ।
ಶೌರ್ಯವ ಕೇಳುವೆ । ಆರ್ಯರ ಸೇವೆಗೆ ॥-
ತಿಳಿಯದೆ ನಗೆಯಾಡಿ । ಹಳಿಯುವ ಕೊರೆಯುವ ।
ಕೆಳೆಗಳ ಕೊಲಿಸಯ್ಯ । ಕಳುಹಯ್ಯ ರಸಿಕರ ॥-
ಚಿರದಿನದುತ್ಸಹ ದೊರೆತೆಯು ನರರಿಗೆ
ದೊರಕಿಸು ಓದೇವ । ಬಲುಮೆಯ ಗಣನಾಥ ॥-
ಕಾವಡಿ ಹೊರುತಲೆ । ತಿರುಗಿದೆ ಬಹುದೂರ
ಕೂಡಬಂದೆ ತೀರ್ಥ । ನೃಡ ುತ ಗಣನಾಥ ॥-
ಚಾತಕವೆಲ್ಲಿದೆ । ಏತಕೆ ಬರಲಿಲ್ಲ
ಕೇತಕವೆಲ್ಲಿದೆ । ಏತಕೆ ಕಂಪಿಲ್ಲ ॥-
ಅತಿಯಕಲ್ಲಲ್ಲಿ ಸಿರಿವ್ರಳಿ ಸುರಿಸಲಿ
ದೊರಕಿಸು ರಸಿಕರ ಶಿವಶಕ್ತಿ ದಾ ॥-
ಥರಥರದೆಸಳಿನ । ಅರಳುಗಳಲ್ಲವೆ
ಹಡುರಸದನ್ನವ । ತಿನಿಸುವೆ ಹಿಡಿಹಿಡಿ ॥-
ಗುಡಿಗಳ ಗಣನೆಗೆ । ಗಣನಾಥ ಬರಿಸಯ್ಯ

ಧಣಿ ನೀನು ಆಣಿಮಾಡಿ । ಮಹಿಮೆಗೆ ಓ ದೇವ ||-
ಅಂಕುಶ ಕೊಡು ಇಲ್ಲಿ | ಶಂಕೆಯು ಕೊಲುವೆನು
ಶಂಕರನರಿಗಳ । ಅಂಕೆಯೊಳಿಡುವೆನು ||-
ಪಾಶವ ಕೊಟ್ಟರೆ | ಆಶೆಯ ಕಟ್ಟುವೆ
ದೇಶದ ಕೆಲಸಕ್ಕೆ । ಸಾಹಸಿ ನಿಲ್ಲುವೆ
ಪರುಶವ ಕೊಟ್ಟರೆ । ಪರುಷವು ಹಿಡಿಯಲು
ತರಿಯುವ । ತರುಮರ ಹಿರಿದಾಗಿ ಹಬ್ಬಿವೆ||-
ಮೋದಿಸಿ ಮೆಲ್ಲುವ | ಮೊದಕದಲ್ಲಿಹ
ಸ್ವಾದು ಸುರಸಗಳ | ಭೋಧೆಯ ಮಾಡಿಸೊ ||-
ಭೋಧೆಯ ಮಾಡಿಸೋ । ಓದೇವ ಕವನದೋಳ್
ಮೋದಕ ಪದ್ಯವ ಸಾಧಿಸಿ ಬರಿಯುವೆ ||-
ಲಕ್ಕಣ್ಣ ಕಟ್ಟಿದ । ಅಕ್ಕರ ಮಂಟಪ
ಮುಕ್ಕಣ್ಣನಣುಗನೆ । ಬಿಜಮಾಡಿಸೋ ||-

---

## ಗ ಣ ಪ ತಿ

ಹೊಗಳುವರು ಭಟ್ಟಂಗಿಗಳು ನಿನ
ಗಗಣಿತಾರೋಪಗಳ ಮಾಡುತ
ಹಗರಣದ ಕಾಮುಕರು ನಿನ್ನರಿತವರು ಅವರಲ್ಲ
ಸಗುಣ ನಿರ್ಗುಣ ರೂಪ ನೀನೈ
ಜಗಕೆ ಮಂಗಳಕಾರಿ ನೀನೈ
ಮಗುಳೆ ನಮ್ಮಲಿ ಹೊಳೆವ ತೇಜವೆ! ಹೊರತೆ ನೀಯಮಗೆ
ನೊಂದಿ ಮೈತ್ರಿಯು ತಮದಲಿರುಳಲಿ
ಕಂದರೆಲ್ಲರು ಕಾದಿ ಕವ್ಮೊಳ
ಗಿಂದು ನೊಂದಿಹರೆನುತ ಗಣಪನು ಗಿರಿಜೆ ತಾಯ್ ಒಡನೆ
ಬಂದು ನಿಂದಿಹನಿಮಗೆ ! ಹೊಗಿಲಲಿ

ಒಂದುಗೂಡಿಸಿ ನೊಂದ ಕರಗಳ
ಸಂದ ಪ್ರೇಮಾಂಜಲಿಯ ಪುಟದಲಿ ನೀಡಿರರ್ಘ್ಯವನು
ಮಳೆಯ ಕರೆಯಲು ಮೇಘ ಘಟೆಗಳು
ಬಳಲಿ ತೊಳಲಿದ ಧರಣಿ ತಣಿಯಲು
ಹೊಳೆಗಳೇರಲು ನರರು ಹರುಷಿಸೆ ಪರಿಯನರಿಯದಲೆ
ಎಳೆಯ ಸುಳಿಗಳು ಪೂಗಳರಳಲು
ಇಳೆಯು ಕೇದಿಗೆ ಬಿರಿದು ಹೊಗಳಲು
ಸುಳಿದು ಸುಯ್ಯನೆ! ಗಾಳಿಯುಸುರಿತು ಗಣಪ ಬರುತಿಹನು
ಬರಹಗಾರರ ಗುರುವು ನೀನೈ
ಹರನ ಸುತ ಶಿವ ವಟುವು ನೀನೈ
ಹಿರಿದು ಸೇವೆಯ ಮಾಡಲೆಮಗರಿವಿತ್ತು ಸಲಹುತಿಹರು
ಇರವನಿಡು ಶಿವಸುಖದ ಬೆಳಕಲಿ
ಇರಿದು ಅಂಕುಶದಲ್ಲಿ ಶಂಕೆಯ
ಧರೆಯ ಸುಖಗಳ ಕರಿವೆ ಭಕುತಿಯಲೀವೆ ಮೋದಕವ
ಅರಿತು ನೋಡಲು ನಾಡ ಬಲಿಮೆಗೆ
ಹರಿವ ವೀರ್ಯಕೆ ಭಾವಿಸೌಖ್ಯಕೆ
ಹರನ ಸುತ ಸ್ವಾತಂತ್ರ್ಯ ಜೀವಿಗೆ ನೀನೆ ರಕ್ಷಕನು
ಭರತಮಾತೆಯ ಬೆಮರ ಮಣ್ಣೊಳ
ಗುರಿದ ಮೂರುತಿ ಭರತ ಗಣಪತಿಯೆ
ಅರಿತು ನಿನ್ನನು ಭಜಿಸಿ ನಲಿವೆವು! ಜಗದ ಜನರೆಲ್ಲ
ನಡುವ ಬಿಗಿಯುವೆ ಪಾಶ ಬಂಧದಿ
ಹಿಡಿವೆನಂಕುಶ ಕೊಲಲು ಶಂಕೆಯ
ಒಡಲ ಕಟ್ಟುವೆ ಪರರ ಸೇವೆಗೆ ಪೊರೆವೆ ನಾರ್ತರನು
ಹಿಡಿವೆ ಲೇಖನಿ ಬರೆವೆ ಭಾರತ
ದೊಡಲ ಬೇಗೆಯ ಭವ್ಯ ಚರಿತೆಯ
ಒಡೆಯ! ಗಣಪನ ಮಾಡಲೆನ್ನನು ಗಳಿಗೆ ಒಲವಿನಲಿ

---



ಯತೋಽನಂತ ಶಕ್ತೇರನಂತಾಶ್ಚ ಜೀವಾ |
ಯತೋ ನಿರ್ಗುಣಾದಪ್ರಮೇಯಾ ಗುಣಾಸ್ತೇ |
ಯತೋ ಭಾತಿಸರ್ವಂ ತ್ರಿಧಾಭೇದಭಿನ್ನಂ |
ಸದಾ ತಂ ಗಣೇಶಂ ನಮಾಮೋ ಭಜಾಮಃ ||೧||

ಯತಶ್ಚಾವಿರಾಸೀತ್ ಜಗತ್ಸರ್ವಮೇತತ್ |
ತಥಾಬ್ಜಾಸನೋ ವಿಶ್ವಗೋ ವಿಶ್ವಗೋಪ್ತಾ |
ತಥೇಂದ್ರಾದಯೋ ದೇವ ಸಂಘಾ ಮನುಷ್ಯಾಃ |
ಸದಾ ತಂ ಗಣೇಶಂ ನಮಾಮೋ ಭಜಾಮಃ ||೨||

ಯತೋವಹ್ನಿ ಭಾನೂ ಭವೋ ಭೂರ್ಜಲಂಚ |
ಯತಸ್ಸಾಗರಾಶ್ಚಂದ್ರಮಾ ವ್ಯೋಮ ವಾಯುಃ |
ಯತಸ್ಥಾವರಾ ಜಂಗಮಾ ವೃಕ್ಷಸಂಘಾಃ |
ಸದಾತಂ ಗಣೇಶಂ ನಮಾಮೋ ಭಜಾಮಃ ||೩||

ಯತೋ ದಾನವಾಃ ಕಿನ್ನರಾ ಯಕ್ಷಸಂಘಾಃ |
ಯತಶ್ಚಾರಣಾ ವಾರಣಾ ಶ್ವಾಪದಾಶ್ಚ |
ಯತಃ ಪಕ್ಷಿಕೀಟಾ ಯತೋ ವೀರುಧಶ್ಚ |
ಸದಾ ತಂ ಗಣೇಶಂ ನಮಾಮೋ ಭಜಾಮಃ ||೪||

ಯತೋ ಬುದ್ಧಿರಜ್ಞಾನ ನಾಶೋ ಮುಮುಕ್ಷೋಃ |
ಯತಸ್ಸಂಪದೋ ಭಕ್ತಸಂತೋಷಿಕಾಸ್ಯುಃ
ಯತೋ ವಿಘ್ನನಾಶೋ ಯತಃ ಕಾರ್ಯಸಿದ್ಧಿಃ
ಸದಾ ತಂ ಗಣೇಶಂ ನಮಾಮೋ ಭಜಾಮಃ ||೫||

ಯತಃ ಪುತ್ರ ಸಂಪದ್ಯತೋವಾಂಛಿತಾರ್ಥೋ ।
ಯತೋಭಕ್ತ ವಿಘ್ನಾಸ್ತಥಾನೇಕ ರೂಪಾ ।
ಯತಶ್ಯೋಕ ಮೋಹೌಯತಃಕಾಮ ಯೇವ ।
ಸದಾ ತಂ ಗಣೇಶಂ ನಮೂಮೋ ಭಜಾಮಃ ॥ ೬ ॥

ಯತೋನಂತ ಶಕ್ತಿ ಸ್ಸಶೇಷೋ ಭಭೂವ ।
ಧರಾ ಧಾರಣೇನೇಕ ರೂಪೇಚ ಶಕ್ತಿಃ ॥
ಯತೋ ನೇಕಧಾ ಸ್ವರ್ಗಲೋಕೋಹಿ ನಾನಾ ।
ಸದಾ ತಂ ಗಣೇಶಂ ನಮೂಮೋ ಭಜಾಮಃ ॥ ೭ ॥

ಯತೋ ವೇಧ ವಾಚೋಽತಿಕುಂಠಾ ಮನೋಭಿಃ ।
ಸದಾ ನೇತಿ ನೇತೀತಿ ಯತ್ತಾಗೃಣಾಂಸಿ ।
ಪರಬ್ರಹ್ಮರೂಪಂ ಚಿದಾನಂದಭೂತಂ ।
ಸದಾ ತಂ ಗಣೇಶಂ ನಮೂಮೋ ಭಜಾಮಃ ॥ ೮ ॥

॥ ಓಂ ಸ್ವಸ್ತಿ ॥

॥ ಓಂ ಶಾಂತಿ ಶಾಂತಿ ಶಾಂತಿಃ ॥

---

## ॥ ಬಾ ಬಾ ವಿನಾಯಕ ॥

ದೇವರಾರು ನಿನ್ನ ಮುಂದೆ!
ಜಾವ ಜಾವ ಪೂಜೆ ನಿಂದೆ!
ಕಾವ ನೀನು ನಮ್ಮನೆಲ್ಲ,
॥ ಬಾ ಬಾ ವಿನಾಯಕ ॥

ನಾಗಮುಖದ ಭೋಗಿ ಒಡೆಯ,
ಯೋಗಿ ಶಿವನ ಪ್ರೀತಿ ಪುತ್ರ,
ಈಗ ಜಗದ ಪ್ರೀತಿ ಪಾತ್ರ,
॥ ಬಾ ಬಾ ವಿನಾಯಕ ॥

ಕಾಯಿ ನೋಡ ಮಗನೆ ಬಾರೊ !
ಕಾಯು ಮಾನ ಕಾಯ್ವ ವೀರ !
ಈಯೋ ಬಾಳೋ ಶಾಂತಿ ಸೌಖ್ಯ,
॥ ಬಾ ಬಾ ವಿನಾಯಕ ॥

ಇಲಿಯ ಹತ್ತು ಇಳಿಯ ಸುತ್ತು !
ಒಡಲ ಕಟ್ಟು ಬಡವಗಾಗಿ !
ಪಾಶ ಹಿಡಿ, ದೋಷ ಕಡಿ,
॥ ಬಾ ಬಾ ವಿನಾಯಕ ॥

ಯುದ್ಧ ಹೂಡು, ಗೆದ್ದು ಬರುವ !
ಶುದ್ಧ ಶಾಂತಿ ನಿಲಿಸಿ ಬಿಡುವ !
ಎದ್ದು ಬಾರೊ ವಿಘ್ನನಾಶ,
॥ ಬಾ ಬಾ ವಿನಾಯಕ ॥

ಢಂಕೆ ಬಡಿ ಸುಖಂಕರ !
ಶಂಖ ಹಿಡಿ ಭಯಂಕರ !
ಕಿಂಕರನ್ನ ಕಾವ ನಾಥ,
॥ ಬಾ ಬಾ ವಿನಾಯಕ ॥

---

## ಸ್ಯಮಂತಕೋಪಾಖ್ಯಾನ

(ನಿತ್ಯಾತ್ಮ ಶುಕ)

ಸ॥ ಹೊತ್ತ ದುರಿತವ ಪರಿಹರಿಸಲೆಂ
ದಿತ್ತನಾ ಸತ್ರಾಜಿತಾಖ್ಯನು
॥ ಸತ್ಯಭಾಮಾ ದೇವಿಯನು ನಿತ್ಯಾತ್ಮಕಂಗೊಲಿದು ॥ ॥೧॥
ಅರಸ ಕೇಳಾ ದ್ವಾರಕಾಪುರ
ವರದಲಾ ಸತ್ರಾಜಿತಾಖ್ಯನು
॥ ತರಣಿಯನು ಭಜಿಸಿದನು ತತ್ವದ ಭಾವಭಕುತಿಯ[illegible] ॥

ಕರುಣಿಸಿದ ನಾಥಂಗೆ ರತ್ನವ
ನಿರದೆ ನಿಜಭಕ್ತಂಗೆ ಬಳಿಕಾ
|| ಪರಮ ಗುಣನಿಧಿ ಬಂದನಂದಾ ದ್ವಾರಕಾಪುರಕೆ ||

— ೨ —

ತರಣಿ ತನಗಿತ್ತಮಲರತ್ನವ
ನಿರದೆ ಕೊರಳಲಿ ಧರಿಸಿಕೊಂಡಂ
|| ಬರುಹ ಮಿತ್ರನ ಭಕುತ ಸತ್ರಾಜಿತನು ಪುರವರಕೆ ||
ಬರುತಿರಲ್ಕಾ ಪುರಪಾಸಿ ಜನಕಂ
ಡರದೆ ನೋಡುವೆನುತ ಹರಿಕಂ
|| ದಿರದೆ ಬಿನ್ನಹ ಮಾಡಿದರು ಕೃಷ್ಣಂಗೆ ಕೈಮುಗಿದು ||

— ೩ —

ದೇವ ದೇವರ ಚರಣ ಕಮಲಯು
ಗಾವಲೋಕನ ಕಂದಿದೋರಾ
|| ಜೀವ ಸಖನಿದೆ ಬಂದನೀಕ್ಷಿಸುವವರ ದೃಷ್ಟಿಗಳು ||
ಸೀವುತಿವೆ ರಕ್ಷಿಸುವುದಧಿಕ ಕೃ
ಪಾವಲೋಕನ ದೀನಲು ರಾ
|| ಜೀವನಾಭನು ನೋಡಿ ನಗುತಿಂತೆಂದ ನವರೊಡನೆ ||

— ೪ —

ಕಂಜ ಸಖನಲ್ಲಲ್ಲ ಬೆದರದಿ
ರಂಜದಿರಿ! ಅಂಜದಿರಿ! ಬರಿಸೀ
|| ಗುಂಜಿ, ಮಾಣಿಕವೆಂಬ ಮರುಳುಗಳಂತೆ ಮಾತಿಗೆಟ್ಟು ||
ಅಂಜದಿರಿ, ಸತ್ರಾಜಿತನುವರ
ಕಂಜ ಸಖ ಕಿತ್ತಮಳ ರತ್ನ ಸು
ರಂಜಿತನು ಬರುತಿಹನು ಎಂದನು ನಗುತ ಮುರವೈರಿ ||

— ೫ —

ಎನುತಿರಲು ಮಧುವೈರಿ ತನ್ನಯ
ಮನೆಯ ಹೊಕ್ಕನು ಮಣಿರಥನು ಸಂ
|| ಜನಿಸಿದನು ಧನವಂತನಾದನು ಪೂಜಿಸುತ್ತಿರಲು ||

ದಿನದಿನದ ಲೆಂಟೆಂಟು ಭಾರದ
ಕನಕವನು ಮಣಿ ಕೊಡುವುದದರೊಳು
॥ ಜನಿಸದಾದಿ ವ್ಯಾಧಿ ದುರ್ಭಿಕ್ಷಾದಿ ಭಯವೆಂದ ॥

— ೬ —

ಒಂದು ದಿನ ತದ್ರತ್ನವನುಗೋ
ವಿಂದ ನಾ ಸತ್ರಾಜಿತನಕರೆ
॥ ದೆಂದ ನೀವುದು ಯದುನೃಪಾಲಂಗೆಂದೊಡೆಯು ಕೊಡದೆ ॥
ಮಂದಮತಿ ಧನಲೋಭದಲಿ ನಿಜ
ಮಂದಿರದಲೇ ಪೂಜಿಸುತ್ತ ಮು
॥ ಕಂದ ನಾಜ್ಞೆಯ ಮೀರಿ ಲೆಕ್ಕಿಸದಿರ್ದ ನ್ನುಬ್ಬಿನಲಿ ॥

— ೭ —



ಇರಲು ಸಾತ್ರಾಜಿತನ ತಮ್ಮನು
ಧರಿಸಿ ಮಣಿಯನು ಹೋದನಡವಿಗೆ
॥ ತುರಗದಲಿ ಮೃಗಯಾ ವಿಹಾರವಿನೋದದಿಂದಿರಲು ॥
ಕೆರಳಿಕೊಂಡದನು ಸಿಂಹವಾ ಕೇ
ಸರಿಯ ಕೊಂದನು ಜಾಂಬವನು ಬಳಿ
॥ ಕರಸಿ ಕೇಳ್ವಾಮಣಿ ಸಹಿತ ಹೊಕ್ಕನು ಮಹಾಬಿಲವ ॥

— ೮ —

ಅತ್ತಲರಸಿದರಾಪ್ರಸೇನನ
ತೆತ್ತಿಗರು ಸತ್ರಾಜಿತಾದ್ಯರು
॥ ಸತ್ತ ತಮ್ಮನ ಕಂಡು ಕೃಷ್ಣನಮೇಲೆ ಶಂಕಿಸಲು ॥
ಇತ್ತಲೀ ವಾರ್ತೆಯನು ನಿರ್ಮಳ
ಮೂರ್ತಿ ಕೇಳಿದ ತನ್ನವೋಲಣ
॥ ಹೊತ್ತವಿಲಗವ ಕಳೆಯಲು ಪುರಾಂತರನು ಪೊರಮಟ್ಟ ॥

— ೯ —

ಅರಸಿ ಪುರಹರ ನಾಪ್ರಸೇನನ
ಮರಣ ಸಿಂಹದಲಾದುದನು ಕಂ
॥ ಡರಜೆ ಜಂಬತ್ರಿದನು ಸಿಂಹದ ಹೆಜ್ಜೆಯನು ಬಿಡದೆ ॥

ಉರವಣಿಸಿ ಸಿಂಹವದು ವಿಪಿನಾಂ
ತ್ಯದಲಡೆಗೆಡದಿರಲು ಕಂಡನು
॥ ಕರಡಿಯುಗ್ರನ ಗಾಯದಲಿ ಬೇಗಾಡನಸುರಾರಿ ॥

— ೧೦ —

ಸಿಂಹವನು ಕೊಲುವಂತ ಕರಡಿಯು
ಸಿಂಹ ವಿಕ್ರಮವೆಂತೆನುತ ನರ
॥ ಸಿಂಹನೈದಿದನದರ ಹೆಜ್ಜೆಗೆ ಹೆಜ್ಜೆಯನು ಸಿಲಿಸಿ ॥
ಗಹ್ವರವ ನಪವಾದ ಶಿಬಿರಂ
ದಹ್ಯಮಾನಾಂತರನು ಹೊಕ್ಕನ
ಸಕ್ಯಕಾಪತ್ರ್ಯ ವಿದೂರನು ಋಕ್ಷಪನ ಬಳಿವ ॥

— ೧೧ —

ಸಿಂಧನವನ ಸನಿಹಾ ಕಡಲಿ ಗೋ
ವಿಂದನಾ ರತ್ನಾಭಿಲಾಷೆಗೆ
॥ ಸಂದು ಸುಳಿಯುತ್ತಿರಲು ಕಂಡಾಧಾತ್ರಿಸುರಹರನ ॥
ಬಂದನಾರಿವನೆನುತ ನೊರೆಯಿಂದ
ಲಂದದನು ಕೇಳುತ್ತ ಮಿಗೆಹರಿ
॥ ತಂದನಾ ಋಕ್ಷಾಧಿಪತಿ ಜಾಂಬವನು ಕಡುಮೊಳಿದು ॥

— ೧೨ —

ಅರಿಯುದಾತ್ಮಸ್ವಾಮಿಯೆಂಬುದ
ನೆರೆಪಚಾರ ವಿಹೀನನಾಗಿಯೆ
॥ ತರುಬಿ ಕಾದಿದನಾಯುಧಂಗಳ ಲಸ್ತ್ರಶಸ್ತ್ರದಲಿ ॥
ಮುರಿದು ತರುನಿಕರದಲಿ ಮತ್ತೆಯು
ಕರದಮುಷ್ಟಿಯ ಲೊಬ್ಬರೊಬ್ಬರು
॥ ಜಡಿದು ಮೂದಲಿಸುತ್ತ ಮುರರಿಪು ಋಕ್ಷಪತಿಮುಳಿದು ॥

— ೧೩ —

ಮುಷ್ಟಿಯುದ್ಧವ ಮಾಡುತಿರಲಂ
ದಷ್ಟವಿಂಶತಿದಿವಸ ಪರಿಯಂ
॥ [illegible] ॥

ಸರ್ಪವಾದುದು ಸತ್ವವಾತನ
ರಿಕ್ಷವೈರಿಯು ಕರಹತಿಗೆ ನಿ
॥ ಷ್ಪಿಷ್ಟಗಾತ್ರನು ಜಾಂಬುವಂತನು ಬಳಲುತಿಂತೆಂದ ॥

— ೧೪ —

ಆರುನೀನೆಲೆ ವೀರ ಜೀವರ
ಭೂರಿಸತ್ವಾತ್ಮಕನೋ ಕೌಸ್ತುಭ
॥ ಧಾರಿಯೋ ಶಂಕರನೊ ಮೇಣ್ ಸರಸೀರುಹೋದ್ಭವನೋ ॥
ಆರು ತನ್ನೊಡನಕಟ ಕಾದುವ
ವೀರರೀಯುಗದೊಳಗೆ ವಿಸ್ಮಯ
॥ ಕಾರಿಯಾದಿನಲಾ ! ಎನುತ ನೋಡಿದನು ಮನದೊಳಗೆ ॥

— ೧೫ —

ಮತ್ತೆ ಹರಿ ಕರುಣಿಸಲು ಕಂಡನು
ಚಿತ್ತದಲಿ ರಘುನಾಥನೆಂಬುದ
॥ ನತ್ಯಧಿಕ ಭಕ್ತಿಯಲಿ ಮೈಯಿಕ್ಕಿದನು ಚರಣದಲಿ ॥
ಸತ್ಯಸಂಧನೆ ತನಗೆ ಮರವೆಯು
ನಿತ್ತನಿತುದಿನ ಕಾದಿದೆಯೆನು
॥ ತತ್ತನಾ ಜಾಂಬುವನು ಕೃಷ್ಣನ ಕಾಲ್ಗಳನು ಪಿಡಿದು ॥

— ೧೬ —

ಏಳೆನುತ ನೆಗಹಿದನು ಪರಮ ಕೃ
ಪಾಳು ತಕ್ಕೈಸಿದನು ಬಳಿಕನ
॥ ಮೌಳಿಯನು ತನ್ನೆರಡು ಕರತಳದಿಂದೆ ನೆಯ್ದಡವಿ ॥
ಹೇಳಿದನು ಕಾರ್ಯವನು ತನ್ನಯ
ಮೇಲೆ ಮಣಿಕೃತ ದೋಷವನು ಜನ
॥ ಜಾಲ ದಾವಿರ್ಭವಿಸಿದುದ ನಾಜಾಂಬುವಂತಂಗೆ ॥

— ೧೭ —

ಇತ್ತನಾತನು ಬಳಿಕ ತನ್ನಯ
ಪುತ್ರಿಯನು ಜಾಂಬುವತಿ ಯೆಂಬಳ
॥ ನತ್ಯಧಿಕ ಗುಣರೂಪ ಸಂಪನ್ನೆಯನು ಮಣಿಸಹಿತ ॥

ಮೆತ್ತಿ ಬಹುವಿಧ ವಸ್ತುಗಳನೊಲಿ
ದಿತ್ತು ಪೂಜಿಸಿದನು ಪರಾತ್ಪರ
|| ವಸ್ತುವನು ವೇದಾಂತ ವಿಶ್ರುತ ಕೀರ್ತಿಯನು ನಲಿದು ||

— ೧೮ —

ರತ್ನವರವನು ಕೊಂಡು ಕನ್ಯಾ
ರತ್ನಸಹಿತಾ ನಂದದಲಿ ಗುಣ
|| ರತ್ನಮೂರುತಿ ಪುರಕೆ ಬಿಜಯಂಗೈಯ್ಯುತಿರೆ ಕಂಡು ||
ಯತ್ನದಲಿ ಪುರವಾಸಿ ಜನನವ
ರತ್ನಮಯ ತೊಡಿಗೆಗಳ ಲೆಸೆಯಲು
|| ನೂತ್ನನವನೆಂದಿದಿರುಗೊಂಡಯೆ ವಿತತ ವಿಭವದಲಿ ||

— ೧೯ —

ಕರೆಸು ಸತ್ರಾಜಿತನ ನಾಮರ
ಹರನು ಸಭೆಯಲಿ ನೆರೆದ ಪೃಥ್ವೀ
|| ಶ್ವರರ ಬಾಂಧವನಿಕರ ದೊಡ್ಡೋಲಗದ ಮಧ್ಯದಲಿ ||
ಹರುಷ ಮಿಗಲಂದಾಸ್ಯಮಂತಕ
ವರ ಮಹಾರತ್ನವನು ಕೊಟ್ಟನು
|| ಪರಮ ಧಾರ್ಮಿಕನೆನುತ ಕರುಣಾವನಧಿ ಕಯ್ಯಾಗಿದು ||

— ೨೦ —

ಬರಿದೆ ಹೇಳಿದೆ ನಕಟ ಲೋಕ
ಕ್ಕರುಪ ದೈವದಮೇಲೆ ದೋಷವ
|| ಸರಿಯದ ಜ್ಞಾನಿಗಳ ದಾರೆನ್ನಂತೆ ಭುವನದಲಿ ||
ಕೊರತೆಹೊತ್ತುದು ನನ್ನ ಮೇಲೆನು
ತಿರಗಿಲಜ್ಜಾ ಭಾರದಲಿ ಕ
|| ಯ್ಮರೆಯು ಮೋಗದಲಿ ಕೊಂತನಾ ಸತ್ರಾಜಿತನು ಮಣಿಯ ||

S. V. L. V. Press, B.City.

# ಓದೋಣ ಬಾ

ಓದೋಣ ಬಾರೋ ಓದೋಣ ಬಾ
ಗೆಳೆಯ, ಓದೋಣ ಬಾ ॥ ಪ ॥

ಆ ಹೈದ ಈ ಹೈದ ಓದ್ಯಾರು ಮೋಜಿಗೆ
ನಾವಿನ್ನು ಬೋಧೆಗೆ ದೇಶದ ಸೇವೆಗೆ ॥ ೧ ॥

ಈ ಶಾಲೆ ನಮ್ಮದು ಈ ಊರು ನಮ್ಮದು
ಈ ಓದು ನಮ್ಮದು ಬಾರೈ ಬಲುಮಧು ॥ ೨ ॥

ಆ ಹೈದ ಈ ಹೈದ ಹಾದಿಯ ತಪ್ಯಾರು
ಯಾಕಾರು ಒಪ್ಯಾರು ಗುರುಗಳು ನಮ್ಮೋರು ॥೩॥

ಆ ಆಟ ಈ ಆಟ ಮೋಜಿನ ಚಂಡಾಟ
ಚಿಣಿಕೋಲು ಗುಡುಗಾಟ ಚಂದವು ಸಂಜ್ಯಾಟ॥ ೪ ॥

ನಗುವಿನ ಸಾಗರ ಸಖ್ಯಸುಖಾಗರ
ನೀನಿರು ಜಾಗರ ಗೆಲುಸೋಲು ಸಂಕರ ॥ ೫ ॥

ಗುರುವಿಗೆ ಜಯಜಯ ಓದಿಗೆ ಜಯಜಯ
ಶಾಲೆಗೆ ಜಯಜಯ ಜಯವೆಂದು ಜನಕೆಲ್ಲ ॥ ೬ ॥

ನೆನಹಿನ ಮಂದಿರ ಅಲ್ಲೊಂದು ಮಂಟಪ
ಅದರಲ್ಲಿ ಈಕತೆ ಚಿತ್ತಾರವಿರಲಿ
ಓದೋಣ ಬಾ

# ವಿಜಯ ವಿನಾಯ



ಬೆನಕ! ಬೆನಕ! ಏಕದಂತ ಪಚ್ಚೆ ಕಲ್ಲು
ಪಾಣಿಪೀಠ ಮುತ್ತಿನುಂಡೆ ಹೊನ್ನಗಂಟೆ
ಒಪ್ಪುವಂಥ ಶ್ರೀ ವಿಘ್ನೇಶ್ವರ! ನಿನ್ನ ಪಾದಕ್ಕೆ
ಇಪ್ಪತ್ತೊಂದೇ ನಮಸ್ಕಾರಗಳು



ವಿಜಯ ವಿನಾಯ